## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 47
2. ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ
3. ಉತ್ತರಿಸಬೇಕಾದ ದಿನಾಂಕ : 21.09.2020
4. ಉತ್ತರಿಸುವ ಸಚಿವರು : ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ರೈತರ ಜೀವನಾಡಿಯಾಗಿರುವ ಬಿ.ಎಸ್.ಎಸ್.ಕೆ. ಸಕ್ಕರೆ ಕಾರ್ಖಾನೆಯನ್ನು ಕಳೆದ ಎರಡು ಹಂಗಾಮಿನಿಂದ ಪ್ರಾರಂಭ ಮಾಡದೆ ಬಂದ್ ಮಾಡಲಾಗಿದ್ದು, ಅಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಎರಡು ವರ್ಷದಿಂದ ಸಂಬಳ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಅವರಿಗೆ ಪರಿಹಾರ ನೀಡುವ ಯೋಚನೆ ಸರ್ಕಾರಕ್ಕೆ ಇದೆಯೇ; ಇದ್ದಲ್ಲಿ, ಯಾವಾಗ ಪರಿಹಾರ ನೀಡಲಾಗುವುದು; | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಳ್ಳಿಖೇಡ್, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ ಈ ಕಾರ್ಖಾನೆಯು ದುಡಿಯುವ ಬಂಡವಾಳದ ಕೊರತೆ ಮತ್ತು ಆಡಳಿತಾತ್ಮಕ ಅನಾನುಕೂಲಗಳಿಂದಾಗಿ 2019-20ನೇ ಹಂಗಾಮಿನಲ್ಲಿ ಕಬ್ಬು ಅರೆಯುವ ಕಾರ್ಯವನ್ನು ಪ್ರಾರಂಭಿಸಿರುವುದಿಲ್ಲ. ಕಾರ್ಖಾನೆಯು ಕಾರ್ಮಿಕರಿಗೆ ಕಳೆದ 30 ತಿಂಗಳಿಂದ ಸಂಬಳ ನೀಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆ.<br>ಕಾರ್ಖಾನೆಯು ಸಹಕಾರ ಸಂಘಗಳ ಕಾಯ್ದೆಯಡಿಯಲ್ಲಿ ನೋಂದಣಿಯಾಗಿದ್ದು, ತನ್ನದೇ ಆದ ಆಸ್ತಿ ಮತ್ತು ಜವಾಬ್ದಾರಿಗಳನ್ನು ಹೊಂದಿದ್ದು, ಕಾರ್ಖಾನೆ ತನ್ನ ಪ್ರಮುಖ ಜವಾಬ್ದಾರಿಗಳನ್ನು ನಿರ್ವಹಿಸಲು ಬೇಕಾಗುವ ಸಂಪನ್ಮೂಲಗಳನ್ನು ಕ್ರೋಢೀಕರಿಸಿಕೊಂಡು ಪಾವತಿಸಬೇಕಾಗಿರುತ್ತದೆ. ಇದು ಸರ್ಕಾರಿ ಸ್ವಾಮ್ಯದ ಸಾರ್ವಜನಿಕ ವಲಯದ ಕಾರ್ಖಾನೆಯಾಗಿರುವುದಿಲ್ಲ. ಆದ್ದರಿಂದ ಸರ್ಕಾರವು ಕಾರ್ಮಿಕರ ವೇತನ ಬಾಕಿ ಮತ್ತು ಇತರೆ ಬಾಕಿಗಳ ಪಾವತಿಗೆ ಪರಿಹಾರ ನೀಡುವ ಪ್ರಶ್ನೆ ಉದ್ಭವಿಸುವುದಿಲ್ಲ. ಬದಲಾಗಿ ಕಾರ್ಖಾನೆಯೇ ಈ ಜವಾಬ್ದಾರಿಗಳನ್ನು ತೀರುವಳಿ ಮಾಡಬೇಕಾಗಿರುತ್ತದೆ. |
| ಆ | ಈ ಕಾರ್ಖಾನೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಕಾರ್ಮಿಕರಿಗೆ ಪರ್ಯಾಯ ಪರಿಹಾರ ನೀಡುವ ಯೋಜನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಹಮ್ಮಿಕೊಂಡಿರುವ ಯೋಜನೆಗಳಾವುವು; | ಉದ್ಭವಿಸುವುದಿಲ್ಲ. |
| ಇ | ಸದರಿ ಕಾರ್ಖಾನೆಯನ್ನು ಪುನಶ್ಚೇತನ ಮಾಡುವ ಯೋಜನೆ ಸರ್ಕಾರಕ್ಕಿದೆಯೇ; ಇದ್ದರೆ ಯಾವಾಗ ಪ್ರಾರಂಭಿಸಲಾಗುವುದು; ಇಲ್ಲದಿದ್ದರೆ ಅದಕ್ಕೆ ಕಾರಣವೇನು; | ಆರ್ಥಿಕ ಸಂಕಷ್ಟದಿಂದ ಮತ್ತು ಇತರೆ ಕಾರಣಗಳಿಂದ ಸ್ಥಗಿತಗೊಂಡಿರುವ ಸಹಕಾರಿ ಸಕ್ಕರೆ ಕಾರ್ಖಾನೆಗಳನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಮೂಲಕ ಪುನಶ್ಚೇನಗೊಳಿಸುವುದು ಸರ್ಕಾರದ ಪ್ರಚಲಿತ ನೀತಿಯಾಗಿರುತ್ತದೆ.ಈ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ನೀಡುವುದರ ಬಗ್ಗೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರಿಂದ ವರದಿ ಕೋರಲಾಗಿರುತ್ತದೆ. ವರದಿ ಬಂದ ನಂತರ ಸಾಧಕ-ಬಾಧಕಗಳ ಕುರಿತು ಪರಿಶೀಲಿಸಿ ಪುನಶ್ಚೇತನಗೊಳಿಸುವ ಬಗ್ಗೆ ಕ್ರಮವಿಡಲಾಗುವುದು. |

| | | |
|---|---|---|
| ಈ | ಈ ಜಿಲ್ಲೆಯಲ್ಲಿ ಅನೇಕ ಕಾರ್ಮಿಕರಿದ್ದು, ಅವರಿಗಾಗಿ ಒಂದು ಆಸ್ಪತ್ರೆ ನಿರ್ಮಿಸುವ ಯೋಜನೆ ಸರ್ಕಾರದ ಮುಂದಿದೆಯೇ; ಇದ್ದರೆ ಆರಂಭಿಸಲಾಗುವುದು ಯಾವಾಗ; ಇಲ್ಲದಿದ್ದಲ್ಲಿ ಅದಕ್ಕೆ ಕಾರಣವೇನು? (ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿ ಪ್ರಸ್ತುತ ಕಾರ್ಮಿಕರ ರಾಜ್ಯ ವಿಮಾ ಆಸ್ಪತ್ರೆಯನ್ನು ಪ್ರಾರಂಭಿಸುವ ಯೋಜನೆ ಸರ್ಕಾರದ ಮುಂದಿರುವುದಿಲ್ಲ. ಕಾರ್ಮಿಕರ ರಾಜ್ಯ ವಿಮಾ ನಿಗಮದ ಸರ್ವೇ ಪ್ರಕಾರ ಬೀದರ್ ಜಿಲ್ಲೆಯಲ್ಲಿ 12313 ಮಾತ್ರ ಕಾರ್ಮಿಕರನ್ನು ಗುರುತಿಸಿದ್ದು, 50,000 ಕಾರ್ಮಿಕರಿದ್ದಲ್ಲಿ ಮಾತ್ರ ಕಾ.ರಾ.ವಿ. ಆಸ್ಪತ್ರೆಯನ್ನು ಪ್ರಾರಂಭಿಸಲು ಅವಕಾಶವಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ; ಕಾಇ 15[illegible] ಎಲ್‌ಎಸ್‌ಐ 2018 ದಿ: 20-02-2019 ರಲ್ಲಿ ವಿಮಾದಾರರ ಹಿತದೃಷ್ಟಿಯಿಂದ ಬೀದರನಲ್ಲಿ ESI Dispensary cum Branch Office (DCBO) ಪ್ರಾರಂಭಿಸಲು ಸಹಮತಿ ದೊರೆತಿದ್ದು, ಕಾ.ರಾ.ವಿ ನಿಗಮವು DCBOಯನ್ನು ಪ್ರಾರಂಭಿಸಿರುತ್ತದೆ. |

ಸಂಖ್ಯೆ: ಸಿಐ 191 ಸಿಓಎಫ್ 2020

(ಅರಬೈಲ್ ಶಿವರಾಮ ಹೆಬ್ಬಾರ)
ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು